CPMG / KA / BG-GPO/13/2003-2005

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ಸಂಪುಟ ೧೪೦ | ಬೆಂಗಳೂರು, ಗುರುವಾರ, ಜೂನ್ ೧೬, ೨೦೦೫ (ಜೇಷ್ಠ ೨೬ ಶಕ ವರ್ಷ ೧೯೨೭) | ಸಂಚಿಕೆ ೨೪

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ಪೊಲೀಸ್ ಕಮೀಷನರ್‌ರವರ ಕಛೇರಿ, ಬೆಂಗಳೂರು ನಗರ**

**ಟೆಂಡರ್ ಪ್ರಕಟಣೆ**

**ಸಂಖ್ಯೆ: ಸಂಗ್ರಹ-3/ಟಿ.ಆರ್.ಎಂ/48/2004-05, ದಿನಾಂಕ: 28ನೇ ಮೇ 2005**

1. ಸಂಗ್ರಹಣಾ ಸಂಸ್ಥೆ-ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು.
2. ಯೋಜನೆ - ಬೆಂಗಳೂರು ನಗರ ಸಂಚಾರದ ಆಧುನೀಕರಣದ ಬಗ್ಗೆ.

ಬೆಂಗಳೂರು ನಗರ ಸಂಚಾರ ವಿಭಾಗದ ಅನುಕೂಲಕ್ಕಾಗಿ 1000 ಸಂಖ್ಯೆಯ ಮೊಬೈಲ್ ಟ್ರಾಫಿಕ್ ಬ್ಯಾರಿಕೇಡ್‌ಗಳನ್ನು ಸರಬರಾಜು ಮಾಡಲು ಮೊಹರು ಮಾಡಿರುವ ದರಪಟ್ಟಿಗಳನ್ನು ಆಹ್ವಾನಿಸಲಾಗಿದೆ.

ಟೆಂಡರ್ ಅರ್ಜಿಗಳನ್ನು ಹಾಗೂ ಈ ಉಪಕರಣದ ನಿರ್ದಿಷ್ಟತೆ/ವಿಶಿಷ್ಟತೆಯನ್ನು ದಿನಾಂಕ: 30.5.2005 ರಿಂದ 29.6.2005 ರವರೆಗೆ ಯಾವುದೇ ಕೆಲಸದ ದಿನದಂದು ಬೆಳಿಗ್ಗೆ 10.00 ಗಂಟೆಯಿಂದ ಸಾಯಂಕಾಲ 4.00 ಗಂಟೆಯೊಳಗೆ ಈ ಕಛೇರಿಯಲ್ಲಿ ಪಡೆಯಬಹುದು. ಪ್ರತಿ ಟೆಂಡರ್ ಅರ್ಜಿ ನಮೂನೆಯ ಬೆಲೆ ರೂ.500-00 ಗಳನ್ನು ಡಿ.ಡಿ. ಮೂಲಕ ಮಾತ್ರ ಪಾವತಿಸಬಹುದಾಗಿದೆ. (ಮನಿ ಆರ್ಡರ್‌ನಲ್ಲಿ ಪಾವತಿಸಿದರೆ ತಿರಸ್ಕರಿಸಲಾಗುವುದು) ಟೆಂಡರ್ ಅರ್ಜಿಯನ್ನು ಅಂಚೆ ಮೂಲಕ ಪಡೆಯಲು ಇಚ್ಛಿಸುವವರು ರೂ.500-00 ಗಳಿಗೆ ಡಿ.ಡಿ.ಯನ್ನು ಪೊಲೀಸ್ ಕಮೀಷನರ್, ಬೆಂಗಳೂರು ರವರ ಹೆಸರಿನಲ್ಲಿ ಪಡೆದು ಕಳುಹಿಸಲು ಕೋರಲಾಗಿದೆ. ಹಾಗೂ ಸ್ವ ವಿಳಾಸ ಹೊಂದಿದ 9'X12' ಲಕೋಟೆಯ ಮೇಲೆ ರೂ.25-00 ಗಳ ಅಂಚೆ ಚೀಟಿಯನ್ನು ಲಗತ್ತಿಸಿ ಕಳುಹಿಸಲು ಕೋರಿದೆ. ಭರ್ತಿ ಮಾಡಿದ ಟೆಂಡರ್ ಅರ್ಜಿ ನಮೂನೆಗಳನ್ನು ಹಾಗೂ ಶೇಕಡ 2 ರಷ್ಟು ಇಎಂಡಿ ಯನ್ನು ಪ್ರತಿ ಉಪಕರಣದ ಮೌಲ್ಯಕ್ಕೆ ಮುಂಗಡ ಠೇವಣಿಯನ್ನು ಪೊಲೀಸ್ ಕಮೀಷನರ್, ಬೆಂಗಳೂರು ರವರ ಹೆಸರಿನಲ್ಲಿ ಪಡೆದು ಡಿ.ಡಿ. ಹಾಗೂ ಮಾದರಿಯ ಬ್ರೋಚರ್ಸ್, ಕ್ಯಾಟಲಾಗ್ಸ್ ವಿತ್ ಟೆಕ್ನಿಕಲ್ ಸ್ಪೆಸಿಫಿಕೇಷನ್ ಮತ್ತು ಇತರೆ ಸಂಬಂಧಪಟ್ಟ ದಾಖಲೆಗಳೊಂದಿಗೆ ಈ ಕಛೇರಿಯ ಜಂಟಿ ಪೊಲೀಸ್ ಕಮೀಷನರ್ ಸಿ.ಎ.ಆರ್. I/c ಅಪರ ಪೊಲೀಸ್ ಕಮೀಷನರ್, ಆಡಳಿತ, ಬೆಂಗಳೂರು ರವರಾದ ಶ್ರೀ ಗೋಪಾಲ್ ಬಿ ಹೊಸೂರ್ ಐಪಿಎಸ್ ಬೆಂಗಳೂರು ರವರಿಗೆ ಹೆಸರಿಸಿ ದಿನಾಂಕ: 29.6.2005 ರಂದು ಮಧ್ಯಾಹ್ನ 4.30 ಗಂಟೆಯೊಳಗೆ ಸಲ್ಲಿಸತಕ್ಕದ್ದು.

ಈ ದಿನಾಂಕದ ನಂತರದ ಟೆಂಡರ್‌ಗಳನ್ನು ಅಂಗೀಕರಿಸಲಾಗುವುದಿಲ್ಲ. ರಹಸ್ಯ ಲಕೋಟೆಯು ತುದಿಯಲ್ಲಿ (ಇಲ್ಲಿ ಉಪಕರಣಗಳ ಹೆಸರು ನಮೂದಿಸಿ) ಉಪಕರಣಗಳನ್ನು ಸರಬರಾಜು ಮಾಡುವ ಬಗ್ಗೆ ಅರ್ಜಿ ಎಂದು ನಮೂದಿಸಬೇಕು ಹಾಗೂ ಲಕೋಟೆಯು ಸರಬರಾಜು ಮಾಡಲು ಬಯಸುವ ಸಂಸ್ಥೆಯ ವಿಳಾಸವನ್ನು ಒಳಗೊಂಡಿರಬೇಕು.

ಸ್ವೀಕರಿಸಿದ ಟೆಂಡರ್‌ಗಳನ್ನು ದಿನಾಂಕ: 30.6.2005 ರಂದು ಸಂಜೆ 4.30 ಗಂಟೆಗೆ ಈ ಕಛೇರಿಯಲ್ಲಿ ತೆರೆಯಲಾಗುವುದು. ಇಚ್ಛೆಯುಳ್ಳ ಟೆಂಡರ್‌ದಾರರು ಟೆಂಡರ್‌ಗಳನ್ನು ತೆರೆಯುವ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಅವಕಾಶ ನೀಡಲಾಗುವುದು.

ಉಪಕರಣಕ್ಕೆ ಇಎಂಡಿ ಯನ್ನು ಡಿಮ್ಯಾಂಡ್ ಡ್ರಾಫ್ಟ್ ಮೂಲಕ ಪಾವತಿಸದಿದ್ದರೆ ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು ಮತ್ತು ಟೆಂಡರ್‌ದಾರರು ಅಂಚೆ ಮೂಲಕ / ಕೊರಿಯರ್ ಮೂಲಕ ಕಳುಹಿಸುವ ಟೆಂಡರ್ ಅರ್ಜಿ ಮತ್ತು ದಾಖಲಾತಿಗಳು ತಡವಾಗಿ ತಲುಪಿದಲ್ಲಿ / ನಾಶವಾದಲ್ಲಿ ಇಲಾಖೆಯು ಜವಾಬ್ದಾರಿಯಲ್ಲ. ಇಲಾಖೆಯು ಯಾವುದೇ ಕಾರಣವನ್ನು ನೀಡದೇ ಸಾರಾಸಗಟಾಗಿ/ಭಾಗಶಃ ಒಪ್ಪಿಕೊಳ್ಳುವ ಅಥವಾ ಹೆಚ್ಚು ಕಡಿಮೆ ಮಾಡುವ ಅಥವಾ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿದೆ.

ಒಂದು ವೇಳೆ, ಮೇಲೆ ಸೂಚಿಸಿದ ದಿನಾಂಕಗಳಂದು ಅನಿವಾರ್ಯ ಕಾರಣಗಳಿಂದ ರಜೆ ಘೋಷಿಸಲ್ಪಟ್ಟಲ್ಲಿ ಮರುದಿನ ಅದೇ ಸಮಯಕ್ಕೆ ಟೆಂಡರ್ ಪ್ರಕ್ರಿಯೆಗಳನ್ನು ನಡೆಸಲಾಗುವುದು.

**ಗೋಪಾಲ್ ಬಿ. ಹೊಸೂರ್**

ಪಿ.ಆರ್. 317

ಜಂಟಿ ಪೊಲೀಸ್ ಆಯುಕ್ತರು, ಸಿ.ಎ.ಆರ್ I/c ಅಪರ ಪೊಲೀಸ್ ಆಯುಕ್ತರು,
(ಆಡಳಿತ) ಹಾಗೂ (ಟೆಂಡರ್ ಆಹ್ವಾನಿಸುವ ಪ್ರಾಧಿಕಾರ) ಬೆಂಗಳೂರು ನಗರ.

**ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಸಾಗರ ವಿಭಾಗ, ಸಾಗರ**
**ಕಿರು ಅರಣ್ಯ ಉತ್ಪನ್ನ ಮರು-ಟೆಂಡರ್ ಕಂ ಹರಾಜು ಮಾರಾಟ ಸಂಕ್ಷಿಪ್ತ ಪ್ರಕಟಣೆ**
**ಕ್ರಮಾಂಕ: ಎ4.ಎಸ್ ಯು ಪಿ:ಎಂಎಫ್‌ಪಿ:ಸಿಆರ್-4:2005-06, ದಿನಾಂಕ: 22ನೇ ಮೇ 2005**

ಈ ಮೂಲಕ ಸಾರ್ವಜನಿಕರ ಅವಗಾಹನೆಗೆ ತಿಳಿಯಪಡಿಸುವುದೇನೆಂದರೆ ದಿನಾಂಕ: 1.7.2005 ರಿಂದ 30.6.2007ರ ವರೆಗೆ ಎರಡು ವರ್ಷಗಳ ಅವಧಿಗೆ ಸಾಗರ ವಿಭಾಗದ ಈ ಕೆಳಕಂಡ ವಲಯಗಳಲ್ಲಿನ ಮೀಸಲು ಅರಣ್ಯಗಳು ಮತ್ತು ಸಣ್ಣ ಕಾಡುಗಳು ಎಲ್ಲಾ ಸಣ್ಣ ಮತ್ತು ದೊಡ್ಡ ಕೆರೆ ದಂಡೆಗಳು ಅರಣ್ಯ ಇಲಾಖೆಯ ಆಡಳಿತಕ್ಕೆ ಒಳಪಟ್ಟಿರುವ ಎಲ್ಲಾ ರಸ್ತೆಯ ಬದಿಯ ಮರಗಳು, ಕಾಯ್ದಿಟ್ಟ ಅರಣ್ಯ ಸಣ್ಣ ಕಾಡು ಜಿಲ್ಲಾ ಕಾಡು (ಆಯಾ ವಲಯಗಳ ವ್ಯಾಪ್ತಿಗೆ ಒಳಪಟ್ಟಂತೆ ಮಾತ್ರ) ಮುಕ್ತ ಸರ್ಕಾರಿ ಜಮೀನು (ಮುಫತ್ ಮತ್ತು ಜಾಡಿ) ಕಾಡುಗಳಿಂದ ಈ ಕೆಳಗೆ ಸೂಚಿಸಿರುವ ತಪಶೀಲಿನಂತೆ ಗುತ್ತಿಗೆಯನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಸಾಗರ ಅಥವಾ ಅವರಿಂದ ನಿಯೋಜಿತರಾದವರಿಂದ ಮರು ಟೆಂಡರ್ ಕಂ ಹರಾಜು ಮೂಲಕ ವಿಕ್ರಯಿಸಲ್ಪಡುತ್ತದೆ. ಸದರಿ ಟೆಂಡರ್ ಕಂ ಹರಾಜಿನಲ್ಲಿ ಇಲಾಖೆಯಿಂದ ತಪ್ಪಿತಸ್ಥರಾದ ಗುತ್ತಿಗೆದಾರರು ಭಾಗವಹಿಸಲು ಅನರ್ಹರಿರುತ್ತಾರೆ.

**ತಪಶೀಲು**

| ಕ್ರ. ಸಂ. | ಯೂನಿಟ್ ನಂಬರ್ | ವಲಯದ ಹೆಸರು | ಗುತ್ತಿಗೆಯ ಬಾಪ್ತಿನ ವಿವರ | ಗುತ್ತಿಗೆಯ ಅವಧಿ | ಟೆಂಡರ್ ಸ್ವೀಕರಿಸುವ ದಿನಾಂಕ ಮತ್ತು ವೇಳೆ | ಹರಾಜು ಮಾಡುವ ದಿನಾಂಕ ಮತ್ತು ವೇಳೆ | ಮುಂಗಡ ಠೇವಣಿ (ರೂ.) |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | 1 | ಸಾಗರ ವಲಯ | ಮುರುಗನ ಹುಳಿ ಉಪ್ಪಾಗೆ ಹುಳಿ | 1.7.2005 ರಿಂದ 30.6.07ರ ವರೆಗೆ ಅಥವಾ ಕರಾರು ಆದ ದಿನಾಂಕದಿಂದ 30.6.07ರ ವರೆಗೆ | 22.06.05 ರಂದು ಮಧ್ಯಾಹ್ನ 3.00 ಗಂಟೆಗೆ | 6.6.05ರ ಮಧ್ಯಾಹ್ನ 3.30ರ ನಂತರ | 2000-00 |
| 2 | 2 | ಸಾಗರ ವಲಯ | ಕಿರು ಅರಣ್ಯ ಉತ್ಪನ್ನ | -do- | -do- | -do- | 2000-00 |
| 3 | 3 | ಸಾಗರ ವಲಯ | ಗೇರು ಬೀಜದ ಗುತ್ತಿಗೆ | -do- | -do- | -do- | 2000-00 |
| 4 | 4 | ಕಾರ್ಗಲ್ ವಲಯ | ಮುರುಗನಹುಳಿ ಉಪ್ಪಾಗೆ ಹುಳಿ | -do- | -do- | -do- | 2000-00 |
| 5 | 5 | ಕಾರ್ಗಲ್ ವಲಯ | ಕಿರುಕಾಡು ಉತ್ಪನ್ನ | -do- | -do- | -do- | 2000-00 |
| 6 | 6 | ಹೊಸನಗರ ವಲಯ | ಕಿರುಕಾಡು ಉತ್ಪನ್ನ | -do- | -do- | -do- | 2000-00 |
| 7 | 7 | ಹೊಸನಗರ ವಲಯ | ಮುರುಗನಹುಳಿ ಉಪ್ಪಾಗೆ ಹುಳಿ | -do- | -do- | -do- | 2000-00 |
| 8 | 8 | ನಗರ ವಲಯ | ಕಿರುಕಾಡು ಉತ್ಪನ್ನ | -do- | -do- | -do- | 2000-00 |
| 9 | 9 | ನಗರ ವಲಯ | ಮುರುಗನಹುಳಿ ಉಪ್ಪಾಗೆ ಹುಳಿ | -do- | -do- | -do- | 2000-00 |
| 10 | 10 | ಆನಂದಪುರಂ ವಲಯ, ಚೋರಡಿ | ಕಿರುಕಾಡು ಉತ್ಪನ್ನ | -do- | -do- | -do- | 2000-00 |
| 11 | 11 | ಆನಂದಪುರಂ ವಲಯ, ಚೋರಡಿ | ದಾಲ್ಚಿನ್ನಿ ಎಲೆಗಳು | -do- | -do- | -do- | 2000-00 |
| 12 | 12 | ಸೊರಬ ವಲಯ | ಕಿರುಕಾಡು ಉತ್ಪನ್ನ | -do- | -do- | -do- | 2000-00 |
| 13 | 13 | ಶಿರಾಳಕೊಪ್ಪ ವಲಯ | ಹುಣಸೆಹಣ್ಣು | -do- | -do- | -do- | 2000-00 |
| 14 | 14 | ಶಿಕಾರಿಪುರ ವಲಯ | ಕಿರುಕಾಡು ಉತ್ಪನ್ನ | -do- | -do- | -do- | 2000-00 |
| 15 | 15 | ಶಿಕಾರಿಪುರ ವಲಯ | ಹುಣಸೆಹಣ್ಣು | -do- | -do- | -do- | 2000-00 |
| 16 | 16 | ಅಂಬ್ಲಿಗೊಳ ವಲಯ | ಹುಣಸೆಹಣ್ಣು | -do- | -do- | -do- | 2000-00 |
| 17 | 17 | ಅಂಬ್ಲಿಗೊಳ ವಲಯ | ದಾಲ್ಚಿನ್ನಿ ಎಲೆಗಳು | -do- | -do- | -do- | 2000-00 |
| 18 | 18 | ಅಂಬ್ಲಿಗೊಳ ವಲಯ | ಕಿರುಕಾಡು ಉತ್ಪನ್ನ | -do- | -do- | -do- | 2000-00 |
| 19 | 19 | ಆನವಟ್ಟಿ ವಲಯ | ಹುಣಸೆಹಣ್ಣು | -do- | -do- | -do- | 2000-00 |
| 20 | 20 | ಆನವಟ್ಟಿ ವಲಯ | ಕಿರುಕಾಡು ಉತ್ಪನ್ನ | -do- | -do- | -do- | 2000-00 |
| 21 | 21 | ಆನವಟ್ಟಿ ವಲಯ | ದಾಲ್ಚಿನ್ನಿ ಎಲೆಗಳು | -do- | -do- | -do- | 2000-00 |
| 22 | 22 | ಕಾರ್ಗಲ್ ವಲಯ | ಹಾಲುಮಡ್ಡಿ | -do- | -do- | -do- | 2000-00 |

**ಷರತ್ತುಗಳು:**

1) ಸಾಗರ ವಿಭಾಗದಲ್ಲಿ ಅರಣ್ಯ ಗುತ್ತಿಗೆದಾರರಾಗಿ ನಿಮ್ಮ ಹೆಸರುಗಳನ್ನು ಪ್ರಸಕ್ತ ಸಾಲಿನಲ್ಲಿ ನೋಂದಾಯಿಸಿದವರು ಮಾತ್ರ ಮರು ಟೆಂಡರ್ ಕಂ ಹರಾಜಿನಲ್ಲಿ ಭಾಗವಹಿಸಲು ಅವಕಾಶ ಇದೆ.

2) ಟೆಂಡರ್ ಫಾರಂನ ಬೆಲೆ ರೂ.12.00 ಮತ್ತು ತೆರಿಗೆಗಳನ್ನು ಪಾವತಿಸಿ ಫಾರಂಗಳನ್ನು ಟೆಂಡರ್ ದಿನದಂದು ಪಡೆಯಬಹುದು. ಟೆಂಡರ್ ಫಾರಂಗಳನ್ನು ವರ್ಗಾಯಿಸಲು ಬರುವುದಿಲ್ಲ. ಟೆಂಡರ್ ಫಾರಂಗಳನ್ನು ಹರಾಜಿನ ದಿನ 1.00 ಗಂಟೆಯವರೆಗೆ ಕಛೇರಿಯಲ್ಲಿ ಕೊಡಲಾಗುವುದು.

3) ಹರಾಜಿನ ದಿನವೇ ಹೆಚ್ಚಿನ ಸವಾಲುದಾರರು ಗುತ್ತಿಗೆಯ ಅರ್ಧ ಭಾಗದ ಹಣ ಮತ್ತು ಪೂರ್ಣ ಗುತ್ತಿಗೆಯ ಹಣದ ಮೇಲೆ ಚಾಲ್ತಿಯಲ್ಲಿರುವ ತೆರಿಗೆಗಳನ್ನು (ವರಮಾನ ತೆರಿಗೆ ಸೇರಿದಂತೆ) ಸಂದಾಯ ಮಾಡಬೇಕು. ಉಳಿದ ಅರ್ಧಭಾಗದ ಗುತ್ತಿಗೆ ಹಣವನ್ನು ಗುತ್ತಿಗೆ ಕರಾರು ಮಾಡುವಾಗ ಸಂದಾಯ ಮಾಡಬೇಕು.

4) ಗುತ್ತಿಗೆದಾರರು ಟೆಂಡರ್ ಜೊತೆಯಲ್ಲಿ ನಿಗದಿಪಡಿಸಿದ ಇಎಂಡಿ ಯನ್ನು ಡಿ.ಡಿ. ರೂಪದಲ್ಲಿ ಮಾತ್ರ ಪಾವತಿಸಬೇಕು. ಡಿ.ಡಿ. ಮುಖಾಂತರ ಪಾವತಿಸದಿದ್ದ ಟೆಂಡರ್ ಫಾರಂಗಳನ್ನು ಸ್ವೀಕರಿಸಲಾಗುವುದಿಲ್ಲ. ಮತ್ತು ಸೇಲ್ಸ್ ಟ್ಯಾಕ್ಸ್ ಇನ್ಕಂಟ್ಯಾಕ್ಸ್ ಮತ್ತು ಸಾಲ್ವೆನ್ಸಿ ಸರ್ಟಿಫಿಕೇಟುಗಳನ್ನು ನಿಯಮಕ್ಕೆ ಅನುಸಾರವಾಗಿ ಲಗತ್ತಿಸಿರಬೇಕು.

5) ತಪ್ಪಿತಸ್ಥ ಗುತ್ತಿಗೆದಾರರು ಮರು ಟೆಂಡರ್ ಕಂ ಹರಾಜಿನಲ್ಲಿ ಭಾಗವಹಿಸುವುದನ್ನು ನಿಷೇಧಿಸಿದೆ.

6) ರಾಷ್ಟ್ರೀಯ ಉದ್ಯಾನವನ ಮತ್ತು ವನ್ಯಜೀವಿ ಅಭಯಾರಣ್ಯದಲ್ಲಿ ಕಿರು ಕಾಡು ಉತ್ಪನ್ನದ ಸಂಗ್ರಹಣೆಯನ್ನು ನಿಷೇಧಿಸಲಾಗಿದೆ.

7) ಜಯಶೀಲರಾದ ಗುತ್ತಿಗೆದಾರರು ಅದೇ ದಿನದಂದು ಶೇಕಡ 50 ಭಾಗದ ಗುತ್ತಿಗೆ ಹಣ ಮತ್ತು ಪೂರ್ಣ ತೆರಿಗೆಗಳನ್ನು ಪಾವತಿಸತಕ್ಕದ್ದು. ಬಾಕಿ ಉಳಿದ ಶೇಕಡ 50 ಭಾಗದ ಹಣವನ್ನು ಸ್ಥಿರೀಕರಣದ ಆದೇಶ ತಲುಪಿದ ನಂತರದಲ್ಲಿ 15 (ಹದಿನೈದು) ದಿನಗಳೊಳಗಾಗಿ ಪಾವತಿಸತಕ್ಕದ್ದು. ತಪ್ಪಿದ್ದಲ್ಲಿ ಬಾಕಿ ಹಣಕ್ಕೆ ಬಡ್ಡಿಯನ್ನು ವಸೂಲಿ ಮಾಡಲು ಕ್ರಮ ಜರುಗಿಸಲಾಗುವುದು.

8) ಹರಾಜಿನಲ್ಲಿ ಟೆಂಡರ್‌ದಾರರ : ಬಿಡ್ಡುದಾರರ ಸವಾಲನ್ನು ಸ್ವೀಕರಿಸುವ : ತಿರಸ್ಕರಿಸುವ ಅಥವಾ ತಿದ್ದುಪಡಿ ಮಾಡುವ ಹಕ್ಕನ್ನು ಕಾಯ್ದಿರಿಸಿ ಕೊಂಡಿರುತ್ತದೆ.

9) ಅನಿವಾರ್ಯ ಕಾರಣಗಳಿಂದಾಗಿ ಹರಾಜನ್ನು ಮುಂದೂಡುವ : ರದ್ದುಪಡಿಸುವ : ತಿರಸ್ಕರಿಸುವ ಅಧಿಕಾರವನ್ನು ಕಾಯ್ದಿರಿಸಿಕೊಂಡಿದೆ.

10) ಹೆಚ್ಚಿನ ವಿವರಗಳನ್ನು ಈ ಕಛೇರಿಯಿಂದ ಕಛೇರಿಯ ವೇಳೆಯಲ್ಲಿ ಪಡೆದುಕೊಳ್ಳಬಹುದು.

ಪಿ.ಆರ್. 319 ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

## ಕೃಷಿ ಇಲಾಖೆ

## ಕೃಷಿ ಆಯುಕ್ತರ ಕಾರ್ಯಾಲಯ, ಶೇಷಾದ್ರಿ ರಸ್ತೆ, ಬೆಂಗಳೂರು-1

## ಟೆಂಡರ್-ಕಂ-ಬಹಿರಂಗ ಹರಾಜು

**ಸಂಖ್ಯೆ: ಸಾಮಾನ್ಯ:ಜಡವಸ್ತು:ಹರಾಜು:4:2001-02, ದಿನಾಂಕ: 30ನೇ ಮೇ 2005**

**ವಿಷಯ:** ಕೃಷಿ ನಿರ್ದೇಶಕರು, ಶೇಷಾದ್ರಿ ರಸ್ತೆ, ಬೆಂಗಳೂರು ಕಛೇರಿಗೆ ಸೇರಿದ ಅನುಪಯುಕ್ತ ಜಡವಸ್ತುಗಳನ್ನು (ಪೀಠೋಪಕರಣ) ಟೆಂಡರ್-ಕಂ-ಬಹಿರಂಗ ಹರಾಜು ಮಾಡುವ ಬಗ್ಗೆ.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಕೃಷಿ ನಿರ್ದೇಶಕರು, ಶೇಷಾದ್ರಿ ರಸ್ತೆ, ಬೆಂಗಳೂರು-1 ಕಛೇರಿಗೆ ಸೇರಿದ ಅನುಬಂಧ-1 ರಲ್ಲಿ ನಮೂದಿಸಲಾದ ಅನುಪಯುಕ್ತ ಜಡವಸ್ತುಗಳನ್ನು (ಪೀಠೋಪಕರಣ) ಹಾಲಿ ಇರುವ ಸ್ಥಿತಿಯಲ್ಲಿ ದಿನಾಂಕ: 28.7.2005 ರಂದು ಅಪರಾಹ್ನ 3.00 ಗಂಟೆಗೆ ಈ ಕಛೇರಿ ಆವರಣದಲ್ಲಿ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಐಟಂವಾರು ಟೆಂಡರ್-ಕಂ-ಬಹಿರಂಗ ಹರಾಜು ಮೂಲಕ ವಿಲೇ ಮಾಡಲಾಗುವುದು.

### ಷರತ್ತುಗಳು

1. ಟೆಂಡರ್ ಅರ್ಜಿಯನ್ನು ಖಾಲಿ ಕಾಗದದಲ್ಲಿ ಐಟಂವಾರು ದರ ನಮೂದಿಸಿ ಸಲ್ಲಿಸಬೇಕು.
2. ಟೆಂಡರ್ ಲಕೋಟೆಯನ್ನು ಮೊಹರು ಮಾಡಿ ಕೃಷಿ ನಿರ್ದೇಶಕರು, ಬೆಂಗಳೂರು-1 ಇವರ ಹೆಸರಿನಲ್ಲಿ ತೆಗೆದ ರೂ.5000-00 ಡಿ.ಡಿ. ಯೊಂದಿಗೆ ಅಂಚೆ ಮೂಲಕ ಅಥವಾ ಖುದ್ದಾಗಿ ದಿನಾಂಕ: 27.7.2005 ಸಂಜೆ 4.00 ಗಂಟೆಯೊಳಗೆ ಸಲ್ಲಿಸಬೇಕು.
3. ರೂ.5000/- ಡಿ.ಡಿ. ಇಲ್ಲದಿರುವ ಟೆಂಡರನ್ನು ಮಾನ್ಯ ಮಾಡಲಾಗುವುದಿಲ್ಲ.
4. ಬಹಿರಂಗ ಹರಾಜು ಪ್ರಕ್ರಿಯೆ ಮುಕ್ತಾಯವಾದ ನಂತರ ಟೆಂಡರ್ ಲಕೋಟೆಗಳನ್ನು ಬಿಡ್‌ದಾರರ ಹಾಗೂ ಟೆಂಡರುದಾರರ ಸಮ್ಮುಖದಲ್ಲಿ ತೆರೆಯಲಾಗುವುದು. ಅಖೈರು ಬಿಡ್ಡು ಅಥವಾ ಟೆಂಡರ್ ಮೊಬಲಗು ಇವುಗಳಲ್ಲಿ ಗರಿಷ್ಠ ಮೊತ್ತವನ್ನು ಅಂಗೀಕರಿಸಲಾಗುವುದು.
5. ಹರಾಜಿನಲ್ಲಿ ಭಾಗವಹಿಸುವವರು ರೂ.5000/- (ರೂ. ಐದು ಸಾವಿರ) ಮಾತ್ರ ಠೇವಣಿ ಇಟ್ಟು ಹರಾಜಿನಲ್ಲಿ ಭಾಗವಹಿಸುವುದು.
6. ಟೆಂಡರ್ ಹಾಕಿರುವವರು ಸಹ ಬಹಿರಂಗ ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸಿದಲ್ಲಿ ರೂ.5000/- ಠೇವಣಿ ಇಟ್ಟು ಹರಾಜಿನಲ್ಲಿ ಭಾಗವಹಿಸುವುದು.
7. ಯಶಸ್ವಿ ಬಿಡ್ಡುದಾರರು/ಟೆಂಡರ್‌ದಾರರು ಠೇವಣಿ ಮೊಬಲಗು ಹೊರತುಪಡಿಸಿ ಗರಿಷ್ಠ ಬಿಡ್ / ಟೆಂಡರ್ ಮೊತ್ತದ ಶೇ.25 ರಷ್ಟು ಮೊಬಲಗು ಸ್ಥಳದಲ್ಲಿಯೇ ಪಾವತಿಸಬೇಕು. ಟೆಂಡರ್ ಹರಾಜನ್ನು ಸಂಬಂಧಿಸಿದ ಅಧಿಕಾರಿಯು ಅನುಮೋದಿಸಿದ ನಂತರ ಶೇ.75 ಭಾಗ ಮೊಬಲಗು +ನಿಯಮಾನುಸಾರ ತೆರಿಗೆ ಪಾವತಿ ತಮ್ಮ ಸ್ವಂತ ಖರ್ಚಿನಿಂದ 7 ದಿನಗಳ ಒಳಗಾಗಿ ಈ ಕಛೇರಿಯಿಂದ ಅನುಪಯುಕ್ತ ಸಾಮಗ್ರಿಗಳನ್ನು ತೆಗೆದುಕೊಂಡು ಹೋಗತಕ್ಕದ್ದು ಶೇ.25 ಭಾಗ ಸ್ಥಳದಲ್ಲಿ ಪಾವತಿಸಲು ತಪ್ಪಿದಲ್ಲಿ ಅವರು ನೀಡಿರುವ ಠೇವಣಿ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಹಾಗೂ ಈ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ.
8. ಯಶಸ್ವಿ ಬಿಡ್‌ದಾರರು / ಟೆಂಡರ್‌ದಾರರು ಬಿಡ್ ಮೊಬಲಗಿಗೆ ನಿಯಮಾನುಸಾರ ಮಾರಾಟ ತೆರಿಗೆ ಹಾಗೂ ಇತರೆ ತೆರಿಗೆಗಳನ್ನು ಪಾವತಿಸಬೇಕು.
9. ಯಶಸ್ವಿ ಬಿಡ್‌ದಾರರು : ಟೆಂಡರುದಾರರು ಹೊರತುಪಡಿಸಿ ಉಳಿದವರಿಗೆ ಠೇವಣಿ ಹಣ : ಡಿ.ಡಿ.ಯನ್ನು ಹರಾಜು ಪ್ರಕ್ರಿಯೆ ಮುಕ್ತಾಯವಾದ ನಂತರ ಹಿಂದಿರುಗಿಸಲಾಗುವುದು.

10. ಯಶಸ್ವಿ ಬಿಡ್‌ದಾರರು : ಟೆಂಡರ್‌ದಾರರು ಬಿಡ್ ಮೊಬಲಗು ಪೂರ್ತಿ ಪಾವತಿಸಿ, ಸಂಬಂಧಿಸಿದ ಅನುಪಯುಕ್ತ ಸಾಮಗ್ರಿಗಳನ್ನು ನಿಗದಿಪಡಿಸಲಾದ ಅವಧಿಯಲ್ಲಿ ತೆಗೆದುಕೊಂಡು ಹೋಗದಿದ್ದರೆ ಅವರು ಪಾವತಿಸಿರುವ ಠೇವಣಿ ಹಾಗೂ ಶೇ.25 ರಷ್ಟು ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಹಾಗೂ ಈ ಬಗ್ಗೆ ಬಿಡ್‌ದಾರರಿಗೆ ಯಾವುದೇ ಹಕ್ಕು ಇರುವುದಿಲ್ಲ.
11. ಹರಾಜು ಕೈಗೊಳ್ಳುವ, ರದ್ದುಪಡಿಸುವ, ಮುಂದೂಡುವ ಹಾಗೂ ಬಿಡ್ ಅಂಗೀಕರಿಸುವ ಮತ್ತು ತಿರಸ್ಕರಿಸುವ ಹಕ್ಕು ಕಾಯ್ದಿರಿಸಲಾಗಿದೆ.
12. ಅನುಬಂಧ-1 ರಲ್ಲಿ ತಿಳಿಸಲಾದ ಅನುಪಯುಕ್ತ ವಸ್ತುಗಳ ಪ್ರಮಾಣದಲ್ಲಿ ವ್ಯತ್ಯಾಸ ಕಂಡುಬಂದರೆ, ಹರಾಜಿನ ನಂತರ ನಿಖರವಾದ ದಾಸ್ತಾನು ಮಾತ್ರ ಹಸ್ತಾಂತರಿಸಿ, ಐಟಂವಾರು ಬಿಡ್ ಮೊಬಲಗು ಸ್ವೀಕರಿಸಲಾಗುವುದು.
13. ಅನುಪಯುಕ್ತ ಸಾಮಗ್ರಿಗಳನ್ನು ಕಛೇರಿ ವೇಳೆಯಲ್ಲಿ ವೀಕ್ಷಿಸಬಹುದು.

ಕೃಷಿ ನಿರ್ದೇಶಕರ ಪರವಾಗಿ

**ಅನುಬಂಧ-1**

**ಕೃಷಿ ನಿರ್ದೇಶಕರು, ಶೇಷಾದ್ರಿ ರಸ್ತೆ, ಬೆಂಗಳೂರು ಕಛೇರಿಯ ಅನುಪಯುಕ್ತ ಸಾಮಗ್ರಿಗಳ ವಿವರ**

| ಕ್ರಮ ಸಂಖ್ಯೆ | ದಾಸ್ತಾನು ವಸ್ತುಗಳ ವಿವರಗಳು | ಪರಿಮಾಣ ಸಂಖ್ಯೆ |
|---|---|---|
| 1 | ಎಸ್ ಮಾದರಿ ಕುರ್ಚಿಗಳು | 88 |
| 2 | ಫೈಲ್ ಕ್ಯಾಬಿನೆಟ್ | 3 |
| 3 | ಬಹುಲಿಪಿ ಯಂತ್ರ | 5 |
| 4 | ಜೆರಾಕ್ಸ್ ಯಂತ್ರ | 3 |
| 5 | ರಾಕುಗಳು ಕಬ್ಬಿಣ ದೊಡ್ಡದು | 23 |
| 6 | ರಾಕುಗಳು ಕಬ್ಬಿಣ ಸಣ್ಣದು | 3 |
| 7 | ಕಬ್ಬಿಣದ ಪೆಟ್ಟಿಗೆಗಳು (ಟ್ರಂಕ್) | 8 |
| 8 | ಮಡಚುವ ಕುರ್ಚಿಗಳು | 42 |
| 9 | ಟ್ರೇಗಳು | 119 |
| 10 | ವಿದ್ಯುನ್ಮಾನ ಬೆರಳಚ್ಚು ಯಂತ್ರ | 2 |
| 11 | ಟೇಬಲ್ ಫ್ಯಾನುಗಳು | 7 |
| 12 | ಪೆಡಸ್ಟ್ರಿಯಲ್ ಫ್ಯಾನ್ | 4 |
| 13 | ತೂಕದ ತಕ್ಕಡಿ (ಸಣ್ಣದು) | 2 |
| 14 | ತೂಕದ ತಕ್ಕಡಿ (ದೊಡ್ಡದು) | 1 |
| 15 | ಫ್ರಾಂಕಿಂಗ್ ಯಂತ್ರ ಸಣ್ಣದು | 1 |
| 16 | ಫ್ರಾಂಕಿಂಗ್ ಯಂತ್ರ ದೊಡ್ಡದು | 1 |
| 17 | ಗಡಿಯಾರಗಳು | 12 |
| 18 | ಪೇಸಿಟ್ ಕ್ಯಾಲ್ಕುಲೇಟರ್ | 03 |
| 19 | ಅಧಿಕಾರಿಗಳ ತಿರುಗು ಕುರ್ಚಿ | 10 |
| 20 | ಎಕ್ಸಿಕ್ಯೂಟಿವ್ ಚೇರ್ | 14 |
| 21 | ತಿರುಗುವ ಬುಕ್ ಸೆಲ್ಫ್ | 01 |

ಪಿ.ಆರ್. 320 ಕೃಷಿ ನಿರ್ದೇಶಕರ ಪರವಾಗಿ

**ಕರ್ನಾಟಕ ಮೃಗಾಲಯ ಪ್ರಾಧಿಕಾರ**

**ಕಾರ್ಯನಿರ್ವಾಹಕ ನಿರ್ದೇಶಕರ ಕಛೇರಿ, ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು-83**

**ಅಲ್ಪಾವಧಿ ಮರು ಟೆಂಡರು ಪ್ರಕಟಣೆ**

**ಸಂಖ್ಯೆ: ಎ4/ಬಿಎಫ್‌ಪಿ/ಸಿಆರ್-15/2005-06, ದಿನಾಂಕ: 1ನೇ ಜೂನ್ 2005**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಬನ್ನೇರುಘಟ್ಟ ಬಟರ್ ಫ್ಲೈ ಪಾರ್ಕಿನಲ್ಲಿ ಈ ಕೆಳಕಂಡ ಕಾಮಗಾರಿಗೆ ಟೆಂಡರ್ ಕರೆಯಲಾಗಿದೆ. ಟೆಂಡರು ಅರ್ಜಿಗಳನ್ನು ಮೊಹರು ಮಾಡಿದ ಲಕೋಟೆಯಲ್ಲಿ ಪಿ.ಡಬ್ಲ್ಯೂ.ಡಿ. 3ನೇ ದರ್ಜೆ ಮತ್ತು ಮೇಲ್ಪಟ್ಟ ದರ್ಜೆಯ ಗುತ್ತಿಗೆದಾರರು ಮತ್ತು ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕಿನ ಗುತ್ತಿಗೆದಾರರಿಂದ ಈ ಕಛೇರಿಗೆ ದಿನಾಂಕ: 18.06.2005ರ ಮಧ್ಯಾಹ್ನ 3.00 ಘಂಟೆಯ ಒಳಗಾಗಿ ಈ ಕೆಳಗೆ ಸಹಿ ಮಾಡಿರುವವರ ಕಛೇರಿಯಲ್ಲಿ ಸಲ್ಲಿಸಲು ತಿಳಿಸಲಾಗಿದೆ.

**ಷೆಡ್ಯೂಲ್**

| ಕ್ರಮ ಸಂಖ್ಯೆ | ಕಾಮಗಾರಿಗಳ ವಿವರಗಳು | ಟೆಂಡರಿನ ಅಂದಾಜು ಮೊತ್ತ (ರೂ.ಲಕ್ಷಗಳಲ್ಲಿ) | ಇ.ಎಂ.ಡಿ. (ರೂ.ಗಳಲ್ಲಿ) | ಕೆಲಸ ಪೂರ್ಣಗೊಳಿಸಲು ಅವಧಿ |
|---|---|---|---|---|
| 1 | ಬಟರ್ ಫ್ಲೈ ಪಾರ್ಕಿನ ಆವರಣದಲ್ಲಿ ನೀರು ಸರಬರಾಜು ಸೌಕರ್ಯ ಕಲ್ಪಿಸುವುದು | ರೂ.2.00 ಲಕ್ಷ | ರೂ.4,000/- | 30 ದಿನಗಳು |

**ಸೂಚನೆ:-** 1. ಟೆಂಡರುದಾರರು ರೂ.555/- (ತೆರಿಗೆಗಳು ಸಹಿತ) ಟೆಂಡರು ಫಾರಂ ಅನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ದಿನಾಂಕ: 15.06.2005 ರಿಂದ 17.06.2005ರ ಸಾಯಂಕಾಲ 5.30 ಘಂಟೆಯವರೆಗೆ ಪಡೆಯಬಹುದು.

2. ಟೆಂಡರನ್ನು ದಿನಾಂಕ: 18.06.2005 ರಂದು ಸಾಯಂಕಾಲ 4.00 ಗಂಟೆಗೆ ತೆರೆಯಲಾಗುವುದು ಹಾಗೂ ಇನ್ನು ಹೆಚ್ಚಿನ ವಿವರಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು.

**ಕೆ.ಬಿ. ಮಾರ್ಕಂಡೇಯ ಭಾ.ಅ.ಸೇ**

ಕಾರ್ಯನಿರ್ವಾಹಕ ನಿರ್ದೇಶಕರು ಮತ್ತು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು-83.

**ZOO AUTHORITY OF KARNATAKA**
**Office of the Executive Director, Bannerghatta Biological Park, Bangalore-560083**
**BRIEF SHORT TERM RE-TENDER NOTIFICATION**
**No. A4-BFP-CR-15/2005-2006, Dated: 1st June 2005**

It is hereby notified for the general information of the public that sealed tenders are invited and will be received by the Executive Director, Bannerghatta Biological Park, Bangalore-83 from the registered PWD contractors of class III and above and from the contractors registered in this office.

**SCHEDULE**

| Unit No. | Particulars of works | Amount put to Tender (Rs. in lakhs) | EMD to be furnished (In Rs.) | Time for execution |
|---|---|---|---|---|
| 1 | Providing water supply facility at Butterfly Park | 2.00 | 4,000 | 30 Days |

**CONDITIONS:**

1. The tender forms with detailed tender conditions can be had from the office of the undersigned during the office hours from 15.06.2005 to 17.06.2005 on payment of Rs.555.00 (including taxes).
2. Reciept of tenders is up to 3.00 PM on 18.06.2005.
3. Openings of tenders at 4.00 PM on 18.06.2005.
4. Further details can be had from the office of the undersigned.

Executive Director & Deputy Conservator of Forests,
Bannerghatta Biological Park, Bangalore-83.

PD-70

**ಕಾರ್ಯನಿರ್ವಾಹಕ ನಿರ್ದೇಶಕರ ಕಛೇರಿ, ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು**
**ಚಿಟ್ಟೆ ಉದ್ಯಾನವನಕ್ಕೆ ಕೀಟ ವಿನ್ಯಾಸ ಪ್ರದರ್ಶನ, ಕೀಟಗಳ ಮಾದರಿ ತಯಾರಿಕೆ ಇತ್ಯಾದಿಗಳಿಗೆ ಅಭಿವ್ಯಕ್ತಿ ಸೂಚಿಸುವ ಬಗ್ಗೆ ಆಹ್ವಾನ**

ಕಾರ್ಯನಿರ್ವಾಹಕ ನಿರ್ದೇಶಕರು, ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು-83 ಇವರಿಂದ ಪ್ರತಿಷ್ಠಿತ ಚಿಟ್ಟೆ ಉದ್ಯಾನವನದಲ್ಲಿ ಕೀಟ ವಿನ್ಯಾಸ ಪ್ರದರ್ಶನ, ಕೀಟಗಳ ರೇಖಾ ಚಿತ್ರ ಪ್ರದರ್ಶನ, ಗಣಕೀಕೃತ ಮೂಲದಿಂದ ಕೀಟಗಳ ಆಂತರಿಕ ಚಲನ ಕಾರ್ಯಕ್ರಮ ಮತ್ತು ಕೀಟಗಳ ಮಾದರಿ ತಯಾರಿಕೆ ಬಗ್ಗೆ ಅಭಿವ್ಯಕ್ತಿ ಸೂಚಿಸಲು ಆಹ್ವಾನಿಸಲಾಗಿದೆ. ಆಸಕ್ತಿಯುಳ್ಳ ವ್ಯಕ್ತಿಗಳು ತಮ್ಮ ಪ್ರಸ್ತಾವನೆಯನ್ನು ದಿನಾಂಕ: 20.06.2005ರ ಒಳಗೆ ಸಲ್ಲಿಸಲು ಕೋರಲಾಗಿದೆ ಹಾಗೂ ಸದರಿ ವಿಷಯದಲ್ಲಿ ಹೆಚ್ಚಿನ ಮಾಹಿತಿಗಳು ಬೇಕಾಗಿದ್ದಲ್ಲಿ ದೂರವಾಣಿ ಸಂಖ್ಯೆ (080) 7828540, 7828300 ರಲ್ಲಿ ಕೆಳಸಹಿದಾರರನ್ನು ಸಂಪರ್ಕಿಸಲು ಕೋರಿದೆ.

ಕಾರ್ಯನಿರ್ವಾಹಕ ನಿರ್ದೇಶಕರು,
ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು-83.

**.BANNERGHATTA BIOLOGICAL PARK**
**INVITATION FOR EXPRESSION OF INTEREST FOR DESIGNING INSECT DISPLAYS & GRAPHICS, WORKING MODELS ETC.**

The Executive Director & Deputy Conservator of Forests, Bannerghatta Biological Park, Zoo Authority of Karnataka invites expression of interest from the experienced & capable firms/individuals for Designing Insect Displays & Graphics, Computer Based Interactive Programmes & Working Models to the prestigious Butterfly Park being established at Bannerghatta. The interested may visit the location & submit comprehensive proposals to reach the Executive Director before 20.06.2005. For details, clarifications contact the Executive Director at phone 7828540, 7828300.

Executive Director & Deputy Conservator of Forests,
Bannerghatta Biological Park, Bangalore-83.

PD-71

**PUBLIC WORKS DEPARTMENT (National Highways)**
**Office of the Executive Engineer, National Highway Divn., Karwar**
**SHORT TERM TENDER NOTIFICATION (TWO COVER BID SYSTEM)**
**No: EE/NHD/KWR/AE/NIT/2005-06/183, Dated: 9th May 2005**

Sealed item Rate Tenders for the works noted below under TWO COVER BID SYSTEM as per Karnataka Transparency in Public Procurement Act-2000 in prescribed form in duplicate are invited from the Class-I Contractors registered in K.P.W.D. / M.O.R.T. & H. approved Firms / Agency. Two cover bid

system of tendering consisting of Technical Bid & Financial Bid. These two covers shall be sealed & kept in another sealed cover duly superscribing the name of work & shall be addressed to the undersigned with name & full postal address of the bidder. Completed bids will be received in the Office of the Superintending Engineer, National Highway Circle, Dharwad or in the Office of the Executive Engineer, National Highway Division, Karwar up to 4.00 P.M. on 22.06.2005, subject to the conditions laid down in form No. PWG-65 & PWG-66 of KPWD Code Vol-II, Special condition contained in Schedules & in Karnataka transparency in Public Procurement Act-2000. The Technical Bid will be opened by the undersigned on the dates noted below. Financial Bid of only those bidders, who qualify in the Technical Bid. shall be opened. If any one of the dates mentioned below happens to be a general holiday, the next convenient day will be intimated.

| Sl. No. | Name of work | Amount put to Tender in Rs. | E.M.D. in Rs. | Cost of Tender Forms (in Rs.) Non refundable including Taxes | Nature of work | Time for completion of work (excluding monsoon) |
|---|---|---|---|---|---|---|
| 1) | Widening to two lane with strengthening from Km. 356.00 to 364.00 of on NH-206 Tumkur-Honnavar Section. | 3,09,37,300/- | 3,09,373/- | 30,000/- + 8% S.T. +10% S.C. on S.T. Total Rs.32,640/- | Widening & Bituminous Work | 10 Months |

**GENERAL CONDITIONS:**

1. The interested contractors in bidding for the work may submit an application to the undersigned along with cost of tender documents (non-refundable) to be paid in cash or in the form of D.D. drawn in favour of the Executive Engineer, National Highway Division, Karwar, payable at Karwar along with application. The applicants should submit proof of registration, latest Income Tax Clearance Certificate, Karnataka Sales Tax Clearance Certificate obtained from the concerned Departments and relevant experience certificate issued by the Officer not below the rank of Executive Engineer, while submitting the application for Tender Schedules, or otherwise the application will not be considered.
2. Schedule of dates is as under:

| | | |
|---|---|---|
| a) | Last date for receipt of application | 14.06.2005 |
| b) | Issue of Blank Tender Schedules upto 5-30 PM | 17.06.2005 |
| c) | Last date for submission of Tenders upto 4-00 PM | 22.06.2005 |
| d) | Opening of Technical Bid at 11-00 AM | 23.06.2005 |

**CONDITIONS FOR TECHNICAL BIDS:**

1. The E.M.D. in the form of F.D.R./D.D./Pay Order/Bank Guarantee Drawn from a Nationalised or Scheduled Bank or N.S.C. (pledged in favour of the undersigned) shall be enclosed in the **Technical Bid.** The Bank Guarantee shall be in the form as specified in PWG-66 supplied with the Tender Form or otherwise tender will be rejected. All types of E.M.D. should be valid for 180 days from the date of opening fixed for tender or otherwise such tenders will be rejected.
2. The defect liability period for the work in this notification will be One year reckoned from the date of completion of the work. The item of works to be executed being of very high standards shall not require any repairs for One year after completion of the same. If the stretch structure notified as above require any repair during defect liability period as above. The contractor / firm shall re-do the same at contractor's firms own cost. The EMD / SD tools shall be accordingly produced.
3. Each tenderer shall own following machinery & enclose with the Technical bid evidence of ownership as detailed under. The technical bids submitted without the evidence of ownership as detailed are liable for disqualification.
4. At the time of submission of application the intending tenderer shall submit an undertaking of erecting the HMP within the radius of 40 Kms. from the work spot on award of the said work.

| Sl. No. | Machinery | Numbers | Evidence of Ownership to be furnished |
|---|---|---|---|
| | **For Bridge & Road Work:** | | |
| 1 | Concrete Mixer | 2 | Copy of Purchase Invoice/Sale deed with a copy of Purchase Invoice from the Seller. |
| 2 | Concrete Vibrators | 2 | - do - |
| 3 | Excavator PC-200 | 2 | - do - |
| 4 | Hot Mix Plant of 40/60 TPH or Higher Capacity (as per MORT & H Specification) | 1 | - do - |
| 5 | Paver finisher | 1 | - do - |
| 6 | Static Road Rollers | 2 | - do - |
| 7 | Vibratory Road Roller | 1 | - do - |
| 8 | Mechanical Sprayers | 2 | - do - |
| 9 | Pug Mill-100 MT | 1 | - do - |
| 10 | Excavator PC-71 with Dozer Blade | 1 | - do - |
| 11 | Tippers | 6 | Copy of Registration Certificate from R.T.O. |
| 12 | Scaffolding & centring material | 4 Unit | -- |
| 13 | Generator | 1 | Copy of Purchase Invoice / Sale deed with a copy of Purchase Invoice from the Seller. |
| 14 | Q.C. equipment such as sieves, Bitumen Extractor & Weighing Machine etc., with Laboratory & Technical Staff. | 1 Unit | -- |

5. Each Tenderer should have individually satisfactorily completed works of similar nature of value not less than 30% of the value of work in this Notification (updated at 10% per annum compoundable) in any one financial year during a block period of previous five years. Alternatively, the contractor should have completed a billing of 30% of the value of work in this Notification, during the current financial year for same nature of work. The experience certificate in this regard should invariably have mention of nature/ items of work executed; otherwise the technical bid is liable for disqualification.
6. For proof of financial capacity, "Line of Credit" from any Scheduled Bank shall be invariably produced for the particular work in the proforma prescribed in the technical bid for an amount equal to 30% of the amount put to tender. Failure to submit the line of credit along with technical bid, lead to disqualification.
7. All the documents enclosed in support of technical bids, shall be attested by a Gazetted Officer not below the rank of District Level Officer. Otherwise the bids are liable for disqualification. The original documents should be produced for verification at any stage of tender process as & when sought for. Failure to produce original documents, leads to disqualification of technical bids. Only relevant certificates & details shall be furnished with the Technical Bid. Details of Company/ Agency/Firms, profiles are to be enclosed.
8. Tendering by Joint venture is not allowed.
9. The Competent authority reserves the right to reject any or all the tenders without assigning any reasons.
10. Conditional Tenders will not be accepted.

Any more details regarding the work can be obtained from the above office during the office hours.

Executive Engineer,
National Highway Division, Karwar.

P.R. 330

**ಟೆಂಡರ್ ಆಹ್ವಾನಿಸುವ ಪ್ರಾಧಿಕಾರ**

**ಡಿಜಿಪಿ ಮತ್ತು ಗೃಹರಕ್ಷಕ ದಳದ ಮಹಾ ಸಮಾದೇಷ್ಟರು ಹಾಗೂ ಪೌರ ರಕ್ಷಣಾ ನಿರ್ದೇಶಕರ ಕಛೇರಿ, ನಂ.1, ಅಣ್ಣಾಸ್ವಾಮಿ ಮೊದಲಿಯಾರ್ ರಸ್ತೆ, ಬೆಂಗಳೂರು-560 042**

**ಮರುಟೆಂಡರ್ ಅಧಿಸೂಚನೆ**

**ಸಂಖ್ಯೆ: ಎಸಿ(6)1/ಬಿಯುಡಿ/2004-05, ದಿನಾಂಕ: 24ನೇ ಮೇ 2005**

1. 2004-05ನೇ ಸಾಲಿಗೆ ರಾಜ್ಯ ಗೃಹರಕ್ಷಕ ದಳದ ಆಧುನೀಕರಣ ಯೋಜನೆ ಅಡಿಯಲ್ಲಿ ಈ ಕೆಳಗೆ ನಮೂದಿಸಿದ ಸಾಮಗ್ರಿಗಳನ್ನು ಸರಬರಾಜು ಮಾಡುವ ಸಲುವಾಗಿ ನೋಂದಾವಣೆಗೊಂಡ ಉತ್ಪಾದಕರು ಮತ್ತು ಸರಬರಾಜುದಾರರಿಂದ ಮೊಹರಾದ ಟೆಂಡರ್‌ಗಳನ್ನು ದ್ವಿಪ್ರತಿಯಲ್ಲಿ ಆಹ್ವಾನಿಸಲಾಗಿದೆ.

| ಕ್ರಮ ಸಂಖ್ಯೆ | ಸಾಮಗ್ರಿಯ ಹೆಸರು | ಪ್ರಮಾಣ | ಅಂದಾಜು ಮೌಲ್ಯ |
|---|---|---|---|
| 1 | ಅಲ್ಯುಮಿನಿಯಂ ಎಕ್ಸ್‌ಟೆನ್‌ಷನ್ ಲಾಡರ್ | 21 ಸಂಖ್ಯೆ | ರೂ.1,30,000/- + ತೆರಿಗೆಗಳು |

2. ಡಿಜಿಪಿ ಮತ್ತು ಗೃಹರಕ್ಷಕ ದಳದ ಮಹಾ ಸಮಾದೇಷ್ಟರು ಹಾಗೂ ನಿರ್ದೇಶಕರು, ಪೌರ ರಕ್ಷಣೆ, ಬೆಂಗಳೂರು ಇವರ ಹೆಸರಿನಲ್ಲಿ ಯಾವುದೇ ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ ರೂ.200/- ಗಳಿಗೆ (ಎರಡು ನೂರು ರೂಪಾಯಿಗಳು) ಮಾತ್ರ ಪಡೆದ ಡಿ.ಡಿ. ಸಂದಾಯಿಸಿ ಕೆಲಸದ ದಿನಗಳಲ್ಲಿ ಈ ಕಛೇರಿಯಿಂದ ನಿಗದಿತ ಟೆಂಡರ್ ಫಾರಂನ್ನು ದಿನಾಂಕ: 20.6.2005 ರಿಂದ 18.07.2005ರ ಸಂಜೆ 4.00 ಗಂಟೆಯವರೆಗೆ ಪಡೆಯಬಹುದಾಗಿದೆ.
3. ಟೆಂಡರಿನೊಂದಿಗೆ ಐಟಂ ಬೆಲೆಯ ಶೇಕಡಾ 1.5ರ ಮೌಲ್ಯದ ಇ.ಎಂ.ಡಿ. ಯನ್ನು ಲಗತ್ತಿಸತಕ್ಕದ್ದು.
4. ಸರಬರಾಜು ಆದೇಶ ನೀಡಿದ ದಿನಾಂಕದಿಂದ 30 ದಿನಗಳ ಕಾಲಾವಧಿಯಲ್ಲಿ ಸರಬರಾಜನ್ನು ಪೂರ್ಣಗೊಳಿಸತಕ್ಕದ್ದು.
5. ಟೆಂಡರನ್ನು ಸ್ವೀಕರಿಸಲು ಕಡೆಯ ದಿನಾಂಕ: 20.7.2005ರ **ಸಂಜೆ 4.00 ಗಂಟೆ.**
6. ಟೆಂಡರನ್ನು ದಿನಾಂಕ: 22.07.2005 ರಂದು ಸಂಜೆ 4.00 ಗಂಟೆಗೆ ತೆರೆಯಲಾಗುವುದು.
7. ಯಾವುದೇ ಕಾರಣ ನೀಡದೇ ಟೆಂಡರನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಕಾದಿರಿಸಲಾಗಿದೆ.
8. ಸ್ಪೆಸಿಫಿಕೇಶನ್:

| Sl.No. | Name of the Item | Quantity | Specification |
|---|---|---|---|
| 1 | Aluminium Extension Ladder | 21 Nos. | Alluminium Extension Ladder made out of Alluminium Alloy, 8' feet closed by 13' feet extendable with lock, pully, rope, rubber shoes and caps. |

**N. SHIVAPRASAD**
Deputy Commandant General, Home Guards, and
Ex-Officio Dy. Director of Civil Defence, Bangalore &
Tender Inviting Authority.

PR-322

**TENDER INVITING AUTHORITY**

**Office of the DGP and Commandant General, Home Guards and Director Civil Defence, No.1, Annaswamy Mudaliar Road, Bangalore-560 042**

**TENDER NOTIFICATION (SHORT TERM)**

**No. STS(1)04/CGO/2005-06, Dated: 7th June 2005**

1. Sealed tenders in duplicate are invited from registered manufacturers and authorized Distributors for the supply and erection & commissioning of one number 40 KVA diesel Generator set with standard acoustic enclosure approved by Central Pollution Control Board (CPCB) and other required necessary accessories.
2. The estimated value is Rs.5.00 (five) lakhs only (including taxes if any).
3. Tender forms can be obtained from this office during working days by paying a.D.D. for Rs. 200/- (Rs.Two hundred) only from any Nationalised Banks drawn in favour of Director General of Police and Commandant General, Home Guards and Director Civil Defence, Bangalore. The Tender forms will be issued from the date of publication of this Tender Notice till **30.06.2005 4.p.m.**
4. The EMD amount of 1.5% of total cost of item should accompany the tender.
5. The authorized Distributors shall furnish the Distributor's Certificate issued by the Manufacturers.
6. The authorized Distributor should furnish work done Certificate duly attested issued by an Officer not below the rank of Executive Engineer along with requisition for having executed similar three works of 40 KVA or above DG sets in any Government Organisation.
7. The authorized Distributors should have minimum of two years experience in supply, erection testing & commissioning of 40 KVA or above DG sets with acoustic enclosure and shall furnish a certificate to this effect.
8. Supply and erection and commissioning shall be completed within 30 days from the date of issue of supply order.
9. The last date for receipt of Tender is 04.07.2005 at 4 p.m.
10. Tender will be opened on 06.07.2005 at 4 p.m.
11. The right to accept or reject the Tender without assigning any reasons there of is reserved.
12. Specification:

Supply, Erection and Commissioning of 1 x 40 KVA Diesel Generator set with standard Acoustic Enclosure approved by C.P.C.B. & other required necessary accessories.

**N. SHIVAPRASAD**
Deputy Commandant General, Home Guards and Deputy
Director, Civil Defence and Tender Inviting Authority.

PR-323

**ಉದ್ಯೋಗ ಮತ್ತು ತರಬೇತಿ ಇಲಾಖೆ**
**ಪ್ರಾಚಾರ್ಯರ ಕಾರ್ಯಾಲಯ, ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಅರಕಲಗೂಡು**
**ಸಂಕ್ಷಿಪ್ತ ಪ್ರಕಟಣೆ ವಿವರ**
**ಸಂಖ್ಯೆ: ಕೈತಸಂ:ಅಗೂ:ಖರೀದಿ:ಸಿಆರ್-1:2005-06, ದಿನಾಂಕ: 28ನೇ ಮೇ 2005**

ನಿರ್ದೇಶಕರು ಉದ್ಯೋಗ ಮತ್ತು ತರಬೇತಿ ಇಲಾಖೆ, ಬೆಂಗಳೂರು, ಅವರ ಅಧೀನ ಕಛೇರಿ ಜಂಟಿ ನಿರ್ದೇಶಕರು (ತ) ವಿಭಾಗೀಯ ಕಛೇರಿ, ಮೈಸೂರು ರವರ ಆದೇಶದಂತೆ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಅರಕಲಗೂಡಿನ ಉಗ್ರಾಣದಲ್ಲಿರುವ ನಿರುಪಯುಕ್ತ ವಸ್ತುಗಳನ್ನು ದಿನಾಂಕ: 20.7.2005 ರಂದು ಸರಿಯಾಗಿ ಬೆಳಿಗ್ಗೆ 10 ಗಂಟೆಗೆ ಬಹಿರಂಗ ಹರಾಜು ಮೂಲಕ ನಮೂನೆ 34ಬಿ ರಲ್ಲಿ ಇರುವ ಸ್ಕ್ರ್ಯಾಪ್ ಸಾಮಗ್ರಿಗಳನ್ನು ಬಹಿರಂಗ ಹರಾಜು ಮಾಡಲಾಗುವುದು. ಈ ಬಗ್ಗೆ ಇಚ್ಛಿಸುವ ಸಾರ್ವಜನಿಕರು : ಗ್ರಾಹಕರು ಕಛೇರಿ ವೇಳೆಯಲ್ಲಿ ಬಂದು ನಮೂನೆ-34ಬಿ ರಲ್ಲಿ ಇರುವ ಸ್ಕ್ರ್ಯಾಪ್ ಸಾಮಗ್ರಿಗಳ ವಿವರಗಳನ್ನು ಕಛೇರಿಯ ಸೂಚನಾ ಫಲಕದಲ್ಲಿ ವೀಕ್ಷಿಸಬಹುದು.

**ಹರಾಜಿನ ನಿಯಮಗಳು**

1. ಸಾರ್ವಜನಿಕರು ಹರಾಜಿನ ದಿನದಂದು $^1/_2$ ಗಂಟೆ ಮುಂಚಿತವಾಗಿ ಈ ಕಛೇರಿಗೆ ಬಂದು ರೂ.100-00 ಠೇವಣಿಯನ್ನು ಇಡತಕ್ಕದ್ದು.
2. ಸರ್ಕಾರ ನೀಡಿರುವ (ರಿಸರ್-ವ್ಯಾಲ್ಯೂಯ್) ಮೌಲ್ಯ ಬಂದರೆ ಹರಾಜನ್ನು ಮಾಡಲಾಗುವುದು. ಇಲ್ಲದಿದ್ದರೆ ಇದನ್ನು ರದ್ದುಪಡಿಸಲು ಹಾಗೂ ವಿಲೆವಾರಿ ಮಾಡಲು ಸಂಪೂರ್ಣ ಹಕ್ಕನ್ನು ಪ್ರಾಚಾರ್ಯರು ಕಾಯ್ದಿರಿಸಿಕೊಂಡಿರುತ್ತಾರೆ.
3. ಯಾರು ಹೆಚ್ಚಾಗಿ ಸರ್ಕಾರಿ ನಿಗದಿತ (ರಿಸರ್ವ್ ವ್ಯಾಲ್ಯೂಯ್) ಮೌಲ್ಯದಿಂದ ಕೂಗಿರುತ್ತಾರೆ. ಅಂತಹ ಬಿಡ್ಡ್‌ದಾರರಿಗೆ ವಸ್ತುಗಳನ್ನು ನೀಡಲಾಗುವುದು.
4. ಇದಕ್ಕೆ ಸಂಬಂಧಿಸಿದ ವ್ಯಾ:ಕೆ.ಎಸ್.ಟಿ. ಹಾಗೂ ಹರಾಜಿನ ಮೌಲ್ಯವನ್ನು ಸ್ಥಳದಲ್ಲಿ ಪಾವತಿಸತಕ್ಕದ್ದು.
5. ವಿಲೇವಾರಿ ಆದ ನಂತರ ನೀವು ಪಾವತಿಸಿರುವ ಠೇವಣಿ ರೂ.100-00 ಅನ್ನು ಸ್ಥಳದಲ್ಲೇ ಹರಾಜಿನಲ್ಲಿ ಪಡೆದುಕೊಂಡವರನ್ನು ಬಿಟ್ಟು ಉಳಿದವರಿಗೆ ಪಾವತಿಸಲಾಗುವುದು.

ಪ್ರಾಚಾರ್ಯರು,
ಪಿ.ಆರ್. 324 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಅರಕಲಗೂಡು-573 102.

**ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**
**ಕಾರ್ಯನಿರ್ವಾಹಕ ಅಭಿಯಂತರರ ಕಛೇರಿ, ಸಣ್ಣ ನೀರಾವರಿ ವಿಭಾಗ, ಬೆಳಗಾವಿ**
**ಟೆಂಡರ್ ಪ್ರಕಟಣೆ (ದ್ವಿಲಕೋಟೆ ಪದ್ಧತಿ)**
**ಸಂಖ್ಯೆ: ಎಂಐಡಿ:ಟೆಂಡರ್:ಎ೯:2:2005-06/1183, ದಿನಾಂಕ: 28ನೇ ಮೇ 2005**

ಕರ್ನಾಟಕ ಸರ್ಕಾರದ ರಾಜ್ಯಪಾಲರ ಪರವಾಗಿ ಈ ಕೆಳಕಂಡ ಕೆಲಸಕ್ಕೆ ಕರ್ನಾಟಕ ರಾಜ್ಯ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿಸಿದ ಮೊದಲನೇ ದರ್ಜೆ ಗುತ್ತಿಗೆದಾರರಿಂದ ಮೊಹರಾದ ಟೆಂಡರನ್ನು ದ್ವಿಪ್ರತಿಗಳಲ್ಲಿ ದ್ವಿಲಕೋಟೆ ಪದ್ಧತಿಯಲ್ಲಿ ದಿನಾಂಕ: 18.07.2005 ರಂದು ಭಾರತೀಯ ಕಾಲಮಾನ ಸಂಜೆ 4.00 ಗಂಟೆಯವರೆಗೆ 1) ಕಾರ್ಯನಿರ್ವಾಹಕ ಇಂಜಿನೀಯರ್, ಚಿಕ್ಕ ನೀರಾವರಿ ವಿಭಾಗ, ಬೆಳಗಾವಿ. 2) ಅಧೀಕ್ಷಕ ಇಂಜಿನೀಯರ್, ಚಿಕ್ಕ ನೀರಾವರಿ ವೃತ್ತ, ಬೆಳಗಾವಿ 3) ಮುಖ್ಯ ಇಂಜಿನೀಯರ್, ಚಿಕ್ಕ ನೀರಾವರಿ ಉತ್ತರ ವಲಯ, ಬಿಜಾಪೂರ ಇವರ ಕಛೇರಿಗಳಲ್ಲಿ ಸ್ವೀಕರಿಸಲಾಗುವುದು. ಟೆಂಡರ್ ಭಾಗ-1ನ್ನು 21.07.2005 ರಂದು ತೆರೆಯಲಾಗುವುದು.

ಸದರೀ ಕೆಲಸದ ಟೆಂಡರ್ ಫಾರಂಗಳಿಗಾಗಿ ಅರ್ಜಿ ಸಲ್ಲಿಸುವ ಕೊನೆಯ ದಿನಾಂಕ: 04.07.2005 ಕೆಲಸಕ್ಕಾಗಿ ನಮೂದಿಸಿರುವ ಟೆಂಡರ್ ಫಾರಂ ಬೆಲೆಯನ್ನು ಅರ್ಜಿಯೊಂದಿಗೆ ಡಿ.ಡಿ. / ಬ್ಯಾಂಕರ್ಸ್‌ಚೆಕ್ / ನಗದು ರೂಪದಲ್ಲಿ ಪಾವತಿ ಮಾಡಬೇಕು. ಪಾವತಿ ಮಾಡಿದ ಹಣವನ್ನು ಹಿಂದಿರುಗಿಸಲಾಗುವುದಿಲ್ಲ.

ಕಾಮಗಾರಿಯ ಕರಾರುಗಳು, ಐಟಂವಾರು ಪರಿಮಾಣ, ಸಂಪೂರ್ಣ ವಿವರ ನಕ್ಷೆಗಳು, ನಿರ್ದೇಶನಗಳನ್ನೊಳಗೊಂಡ ಖಾಲಿ ಟೆಂಡರ್ ಫಾರಂಗಳನ್ನು ಕಛೇರಿ ಅವಧಿಯಲ್ಲಿ ದಿನಾಂಕ: 11.07.2005 ರಿಂದ 12.07.2005 ರವರೆಗೆ ಚಿಕ್ಕ ನೀರಾವರಿ ವಿಭಾಗ, ಬೆಳಗಾವಿ ಈ ಕಛೇರಿಯಿಂದ ಪಡೆಯಬಹುದು. ಟೆಂಡರ್ ಫಾರಂಗಳನ್ನು ಅಂಚೆ ಮೂಲಕ ಪಡೆಯಲು ಇಚ್ಛಿಸಿದಲ್ಲಿ ಸ್ವವಿಳಾಸವಿರುವ ಬಟ್ವೆಲೇಪಿತ 35 ಸೆಂ.ಮೀ. X 20.5 ಸೆಂ.ಮೀ. ಲಕೋಟೆಯನ್ನು ರೂ.150/- ಗಳ ಅಂಚೆ ಚೀಟಿಯನ್ನು ಲಗತ್ತಿಸಿ ಅರ್ಜಿಯೊಂದಿಗೆ ಸಲ್ಲಿಸತಕ್ಕದ್ದು. ಅಂಚೆ ಸೇವೆಯಲ್ಲಿನ ವಿಳಂಬಕ್ಕೆ ಈ ಇಲಾಖೆಯು ಜವಾಬ್ದಾರರಿರುವುದಿಲ್ಲ.

ಗುತ್ತಿಗೆಗೆ ಸಂಬಂಧಿಸಿದ ನಕ್ಷೆಗಳನ್ನು ವಿವರಗಳನ್ನು ಕಛೇರಿಯ ಸಮಯದಲ್ಲಿ ಗುತ್ತಿಗೆದಾರರು ಪರಿಶೀಲಿಸಬಹುದು. ಮೇಲೆ ನಮೂದಿಸಿದ ದಿನಗಳು ಸಾರ್ವತ್ರಿಕ ರಜಾ ಅಥವಾ ಘೋಷಿತ ರಜಾ ದಿನವಾದಲ್ಲಿ ಮುಂದಿನ ಕೆಲಸದ ದಿನವನ್ನು ಪರಿಗಣಿಸಲಾಗುವುದು.

ಮುಖ್ಯವಾಗಿ ಟೆಂಡರ್‌ದಾರರು ಟೆಂಡರನ್ನು ಭಾಗ-1 ತಾಂತ್ರಿಕ ಬಿಡ್ ಮತ್ತು ಭಾಗ-2 ಆರ್ಥಿಕ ಬಿಡ್ ಎಂದು ಎರಡು ಭಾಗಗಳಲ್ಲಿ ಸಲ್ಲಿಸಬೇಕು. ಭಾಗ-2 ರಲ್ಲಿ ಐಟಂವಾರು ದರಗಳನ್ನು ಟೆಂಡರ್ ಪತ್ರಿಕೆಗಳಲ್ಲಿ ಅಡಕಗೊಂಡಿರುವ ವಿಷಯಗಳನ್ನಾಧರಿಸಿ, ನಿಗದಿತ ನಮೂನೆ ಶೆಡ್ಯೂಲ್-ಬಿ ಯಲ್ಲಿ ಬರೆದು ಟೆಂಡರು ಪುಸ್ತಕದಲ್ಲಿ ಯಾವುದೇ ಬದಲಾವಣೆ ಮಾಡದೆ ಸಲ್ಲಿಸಬೇಕು.

**ಭಾಗ-1 ಟೆಕ್ನಿಕಲ್ ಬಿಡ್‌ನಲ್ಲಿ ಈ ಕೆಳಕಂಡ ಮಾಹಿತಿಯನ್ನು ಒದಗಿಸತಕ್ಕದ್ದು**

1. ಗುತ್ತಿಗೆದಾರರಿಗೆ ಗುತ್ತಿಗೆಯನ್ನು ನೀಡಬೇಕಾದ ಸಂದರ್ಭದಲ್ಲಿ ಗುತ್ತಿಗೆದಾರರ ಹೆಸರಿನಲ್ಲಿ ಕಳೆದ ಐದು ವರ್ಷಗಳಲ್ಲಿ ಅಂದರೆ (2000-01 ರಿಂದ 2004-05 ವರೆಗೆ)
   ಅ) ಕನಿಷ್ಟ ಎರಡು ಆರ್ಥಿಕ ವರ್ಷದಲ್ಲಿ ಅತಿ ಕಡಿಮೆ ಅಂದರೆ ರೂ.280.00 ಲಕ್ಷ (ಎಲ್ಲ ಸಿವಿಲ್ ಇಂಜಿನೀಯರಿಂಗ್ ಕಾಮಗಾರಿ ಮಾತ್ರ) ರಷ್ಟು ಆರ್ಥಿಕ ವಹಿವಾಟನ್ನು ಮಾಡಿರತಕ್ಕದ್ದು.
   ಆ) ಮುಖ್ಯ ಗುತ್ತಿಗೆದಾರರಾಗಿ ಇಂತಹದೇ ಅಂದರೆ ಏತ ನೀರಾವರಿ ಯೋಜನೆ ನಿರ್ಮಾಣ, ಪಂಪು ಪೂರೈಕೆ, ಎಲೆಕ್ಟ್ರಿಕಲ್ ಕಾಮಗಾರಿ ಒಂದೇ ಕಾಮಗಾರಿಯನ್ನು ಶೇ.90 ರಷ್ಟು ಗುತ್ತಿಗೆ ಮೊತ್ತಕ್ಕೆ ಕಡಿಮೆ ಇಲ್ಲದಂತೆ ಅಂದರೆ ರೂ.126.00 ಲಕ್ಷಗಳಿಗೆ ಕಡಿಮೆಯಿಲ್ಲದಂತೆ ಮಾಡಿ

ಮುಗಿಸಿರಬೇಕು. ಮುಖ್ಯ ಗುತ್ತಿಗೆದಾರರಾಗಿ ಅಂದರೆ ಕಾಮಗಾರಿಯನ್ನು ಅವರೇ ನಿರ್ವಹಿಸಿ ಬಿಲ್ಲನ್ನು ಅವರ ಹೆಸರಿನಲ್ಲಿಯೇ ನಮೂದಿಸಿ ಹಣ ಪಾವತಿ ಅವರ ಹೆಸರಿನಲ್ಲಿಯೇ ಆದ ಬಗ್ಗೆ ಸಂಬಂಧಪಟ್ಟ ಕಾರ್ಯನಿರ್ವಾಹಕ ಇಂಜಿನೀಯರ್‌ರಿಂದ ಪ್ರಮಾಣ ಪತ್ರ ಸಲ್ಲಿಸಬೇಕು.

ಇ) ಒಂದು ವರ್ಷದಲ್ಲಿ ಈ ಕೆಳಗಿನ ಪರಿಮಾಣದ ಕಾಮಗಾರಿಗಳನ್ನು ಸಮರ್ಥ ರೀತಿಯಲ್ಲಿ ನಿರ್ವಹಿಸಿರಬೇಕು.

1. ರೈಸಿಂಗ್ ಮೇನ್ ಕಾಮಗಾರಿ ಪಿ.ಎಸ್.ಸಿ. ಪೈಪ್‌ಗಳನ್ನು-6000 ಮಿ. (400 ಮಿ.ಮೀ. ವ್ಯಾಸಕ್ಕೆ ಕಡಿಮೆ ಇಲ್ಲದಂತೆ)
2. ಪಂಪು ಮೋಟರ್ ಪೂರೈಕೆ ಅಳವಡಿಕೆ ಹಾಗೂ ಚಾಲನೆ-75 (ಎಚ್.ಪಿ.2 ಸಂ.)

2. ಗುತ್ತಿಗೆದಾರರು ಅಥವಾ ಗುತ್ತಿಗೆದಾರರಿಂದ ಗುರುತಿಸಲಾದ ಉಪ ಗುತ್ತಿಗೆದಾರರು ಎಲೆಕ್ಟ್ರಿಕಲ್ ಮತ್ತು ಮೆಕ್ಯಾನಿಕಲ್ ಕಾಮಗಾರಿಯನ್ನು ಒಟ್ಟು ರೂ.20.00 ಲಕ್ಷಗಳಿಗೆ ಸಮರ್ಥವಾಗಿ ನಿರ್ವಹಿಸಿರಬೇಕು.

3. ಗುತ್ತಿಗೆದಾರರು ಈ ಕೆಳಗಿನ ಸಾಮರ್ಥ್ಯಗಳನ್ನು ತೋರಿಸುವುದು ಅತೀ ಅವಶ್ಯ ಇರುವುದು.

ಅ) ಈ ಕಾಮಗಾರಿಗಾಗಿ ಒಬ್ಬ ಸಮರ್ಥ ಕನಿಷ್ಠ 5 ವರ್ಷಗಳಲ್ಲಿ ಇಂತಹ ಕಾಮಗಾರಿಯನ್ನು ನಿರ್ವಹಿಸಿದ ಅನುಭವ ಹೊಂದಿದ ಯೋಜನಾ ಅಧಿಕಾರಿಯ ಲಭ್ಯತೆಯ ಬಗ್ಗೆ ಪ್ರಮಾಣ ಪತ್ರ ಹಾಗೂ ಇತರೇ ಅನುಭವವುಳ್ಳ ಕೆಲಸಗಾರರ ಲಭ್ಯತೆಯ ಬಗ್ಗೆ ಪ್ರಮಾಣ ಪತ್ರ ನೀಡುವುದು.

ಆ) ಈ ಕಾಮಗಾರಿಗೆ ಬೇಕಾದ ಸಂಪನ್ಮೂಲ ಚರಾಸ್ತಿ ಅಥವಾ ಬ್ಯಾಂಕ್ ಕ್ರೆಡಿಟ್ ರೂಪದಲ್ಲಿ ಕನಿಷ್ಠ ರೂ.35.00 ಲಕ್ಷಗಳ ಲಭ್ಯತೆಯ ಬಗ್ಗೆ ಪ್ರಮಾಣ ಪತ್ರ (ಕ್ರೆಡಿಟ್ ಲೈನ್ಸ್ / ಅನುದಾನ ಪ್ರಮಾಣ ಪತ್ರ ಬ್ಯಾಂಕಿನಿಂದ ಪ್ರಮಾಣೀಕರಿಸಿದ್ದು).

4. ಈ ಕಾಮಗಾರಿಯಲ್ಲಿ ಸಿವಿಲ್, ಮೆಕ್ಯಾನಿಕಲ್ ಇಲೆಕ್ಟ್ರಿಕಲ್ ಕೆಲಸ ಒಳಗೊಂಡಿರುವುದರಿಂದ ಅವಶ್ಯ ಪರಿಣಿತ ತಾಂತ್ರಿಕ ಸಿಬ್ಬಂದಿ ಹೊಂದಿದ ಬಗ್ಗೆ ಅವಶ್ಯ ದಾಖಲೆಗಳನ್ನು ಒದಗಿಸತಕ್ಕದ್ದು.

ತಾಂತ್ರಿಕ ಬಿಡ್‌ನಲ್ಲಿ ಅರ್ಹತೆ ಹೊಂದಿದವರ ಹೆಸರಿನ ಪಟ್ಟಿಯನ್ನು ಕಾ.ನೀ.ಇಂ. ಸಣ್ಣ ನೀರಾವರಿ ವಿಭಾಗ, ಬೆಳಗಾವಿ, ಇವರ ಕಛೇರಿ ಸೂಚನಾ ಫಲಕದಲ್ಲಿ ಪ್ರಕಟಿಸಲಾಗುವುದು. ತಾಂತ್ರಿಕ ಬಿಡ್‌ನ ಅರ್ಹತೆಗಾಗಿ ಸಲ್ಲಿಸಲಿರುವ ದಸ್ತಾವೇಜುಗಳ ಪ್ರಾಮಾಣಿಕತೆ ಮತ್ತು ಸತ್ಯಾಸತ್ಯತೆಗಳನ್ನು ಖಚಿತಗೊಳಿಸಲು ಅವುಗಳ ಮೇಲೆ ಗುತ್ತಿಗೆದಾರರು ದೃಢೀಕರಿಸಿ ಸಹಿ ಮಾಡತಕ್ಕದ್ದು ದಸ್ತಾವೇಜುಗಳ ಮೇಲೆ ಗುತ್ತಿಗೆದಾರರು ದೃಢೀಕರಿಸಿ ಸಹಿ ಮಾಡಿರದಿದ್ದಲ್ಲಿ ಅಂತಹ ದಸ್ತಾವೇಜುಗಳ ತಾಂತ್ರಿಕ ಮೌಲ್ಯ ಮಾಪನ ಮಾಡಲು ಪರಿಗಣಿಸಲಾಗುವುದಿಲ್ಲ.

ಸದರಿ ಕಾಮಗಾರಿಯ ಭಾಗ-1 ನ್ನು ಮೊದಲು ತೆರೆದು ಮೌಲ್ಯ ನಿರ್ಣಯ ಮಾಡಲಾಗುವುದು. ತಾಂತ್ರಿಕ ಬಿಡ್‌ನಲ್ಲಿ ಅರ್ಹತೆ ಹೊಂದಿದವರ ಆರ್ಥಿಕ ಬಿಡ್ ಭಾಗ-2 ನ್ನು ಸಕ್ಷಮ ಅಧಿಕಾರಿಗಳ ನಿರ್ದೇಶನದಂತೆ ನಿಗದಿಪಡಿಸಲಾದ ದಿನಾಂಕದಂದು ತೆರೆಯಲಾಗುವುದು.

ಟೆಂಡರಿನ ಇತರ ಷರತ್ತುಗಳು ಫಾರಂ ಪಿ.ಡಬ್ಲ್ಯೂ.ಜಿ. 65 ಮತ್ತು ಪಿ.ಡಬ್ಲ್ಯೂ.ಜಿ. 66 ಮತ್ತು ಪಾರದರ್ಶಕತೆ ಅಧಿನಿಯಮ 1999 ಮತ್ತು 2000 ಅಧಿನಿಯಮಗಳನ್ವಯ ಇರುತ್ತದೆ. ಹಾಗೂ ಸರ್ಕಾರಿ ಸುತ್ತೋಲೆ ನಂ. ಪಿ.ಡಬ್ಲ್ಯೂ.ಜಿ. 1359 ಎಸ್.ಓ.ಎಫ್.ಸಿ. 2001 (ಪಿ2) ಡಬ್ಲ್ಯೂ 3/12/02 ನ್ವಯ ಇರುತ್ತದೆ.

**ಕಾಮಗಾರಿಯ ವಿವರಣೆ**

| ಅ. ನಂ. | ಕೆಲಸದ ಹೆಸರು | ಟೆಂಡರಿಗಿಟ್ಟ ಅಂದಾಜು ಮೊತ್ತ ಲಕ್ಷ ರೂ.ಗಳು | ಇಡುಗಂಟು ಅಂದಾಜು ಮೊತ್ತ ಲಕ್ಷ ರೂ.ಗಳು | ಟೆಂಡರ್ ಫಾರಂ ಬೆಲೆ ರೂ. ತೆರಿಗೆ ಪ್ರತ್ಯೇಕ (ಹಿಂದಿರು ಗಿಸಲಾಗದ) | ಕೆಲಸವನ್ನು ಮುಗಿಸುವ ಕಾಲಮಿತಿ ಮಳೆಗಾಲ ಬಿಟ್ಟು | ಗುತ್ತಿಗೆದಾರರ ದರ್ಜೆ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾ. ಉಳ್ಳಾಗಡ್ಡಿವಾಡಿ ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ | 140.00 | 1.40 | 14000.00 + ತೆರಿಗೆ | 12 ತಿಂಗಳು | ಪ್ರಥಮ ದರ್ಜೆ (ಸಿವಿಲ್) |

**ಸೂಚನೆಗಳು:**

1) ಯಾವ ಕಾರಣವನ್ನು ನೀಡದೇ ಯಾವುದೇ ಅಥವಾ ಎಲ್ಲಾ ಟೆಂಡರುಗಳನ್ನು ನಿರಾಕರಿಸುವ ಹಕ್ಕನ್ನು ಇಲಾಖೆ ಕಾದಿರಿಸಿಕೊಂಡಿದೆ.
2) ಮುಂಗಡ ಠೇವಣಿಯನ್ನು ಕಾರ್ಯನಿರ್ವಾಹಕ ಅಭಿಯಂತರು, ಚಿಕ್ಕ ನೀರಾವರಿ ವಿಭಾಗ, ಬೆಳಗಾವಿ ಇವರ ಹೆಸರಿನಲ್ಲಿ ನಿಗದಿ ಠೇವಣಿ ಮಾಡಿದ ರಸೀದಿಯನ್ನು ಅಥವಾ ಬ್ಯಾಂಕ್ ಗ್ಯಾರಂಟಿ ಕೆಲಸದ ಹೆಸರನ್ನು ನಮೂದಿಸಿ ಅಥವಾ ರಾಷ್ಟ್ರೀಯ ಉಳಿತಾಯ ಯೋಜನೆ ಸರ್ಟಿಫಿಕೇಟುಗಳನ್ನು ಈ ಕೆಳಗೆ ಸಹಿ ಮಾಡಿದವರಿಗೆ ಪಾವತಿಯಾಗುವಂತೆ ಪ್ಲೆಡ್ಜ್ ಮಾಡಿ ಕಳುಹಿಸುವುದು ಹಾಗೂ ಮಾಡಲು ತಪ್ಪಿದಲ್ಲಿ ಟೆಂಡರುಗಳನ್ನು ನೇರವಾಗಿ ನಿರಾಕರಿಸಲಾಗುವುದು.
3) ವ್ಯಾಲಿಡಿಟಿ ಪಿರಿಯಡ್ ತೊಂಬತ್ತು (90) ದಿವಸಗಳ ಅವಧಿಯನ್ನು ಒಳಗೊಂಡಿದ್ದು ಮುಂಗಡ ಠೇವಣಿ ಕ್ರಮ ಬದ್ಧತೆಯು ಅದೇ ಅವಧಿಗೆ ಬೇಕಾಗುತ್ತದೆ.
4) ಗುತ್ತಿಗೆದಾರರು ಟೆಂಡರ್ ಫಾರಂಗಳಿಗಾಗಿ ಅರ್ಜಿ ಸಲ್ಲಿಸುವಾಗ್ಗೆ ಚಾಲ್ತಿಯಲ್ಲಿರುವ ನೋಂದಣಿ ನಕಲನ್ನು ಸಲ್ಲಿಸಬೇಕು. ಹಾಗೂ ಇತ್ತೀಚಿನ ನವೀಕೃತ ನೋಂದಣಿ ಪತ್ರವನ್ನು ಸಲ್ಲಿಸಬೇಕು ವರಮಾನ ತೆರಿಗೆ, ರಾಜ್ಯ ಮಾರಾಟ ತೆರಿಗೆ ಕ್ಲಿಯರೆನ್ಸ್ ಪ್ರಮಾಣ ಮುಂತಾದವುಗಳನ್ನು ಸಲ್ಲಿಸಬೇಕು. (ಮೂಲಪ್ರತಿಗಳನ್ನು ಪರಿಶೀಲನೆಗೂ ಹಾಗೂ ಪ್ರತಿಗಳನ್ನು ಪತ್ರಾಂಕಿತ ಅಧಿಕಾರಿ / ನೋಟರಿಯಿಂದ ದೃಢೀಕರಿಸಿ ಸಲ್ಲಿಸಬೇಕು)
5) ಖಾಲೀ ಟೆಂಡರ್ ಫಾರಂಗಳನ್ನು ಪಡೆದ ಎಲ್ಲಾ ಗುತ್ತಿಗೆದಾರರು ಸರಿಯಾದ ಇ.ಎಂ.ಡಿ. ಯೊಂದಿಗೆ ಟೆಂಡರಿನಲ್ಲಿ ಕಡ್ಡಾಯವಾಗಿ ಭಾಗವಹಿಸಬೇಕು. ತಪ್ಪಿದರೆ ಅಂತಹ ಗುತ್ತಿಗೆದಾರರನ್ನು ಕಪ್ಪು ಪಟ್ಟಿಯಲ್ಲಿಡಲಾಗುವುದನ್ನು ವಿಶೇಷವಾಗಿ ಗಮನಿಸಬೇಕು.
6) ಖಾಲಿ ಟೆಂಡರ್ ಫಾರಂ ಪಡೆಯುವಾಗ ಗುತ್ತಿಗೆದಾರರು ನೋಂದಣಾಧಿಕಾರಿಗಳು ನೀಡಿದ ಗುತ್ತಿಗೆದಾರರ ಪಾಸ್ ಬುಕ್ಕನ್ನು ತಪ್ಪದೇ ಹಾಜರ್‌ಪಡಿಸಬೇಕು. ತಪ್ಪಿದಲ್ಲಿ ಟೆಂಡರ್ ಫಾರಂಗಳನ್ನು ನೀಡಲಾಗುವುದಿಲ್ಲ.
7) ಭೂಸ್ವಾಧೀನಕ್ಕಾಗಿ ವಿಳಂಬವಾದಲ್ಲಿ ಅದಕ್ಕೆ ಇಲಾಖೆಯು ಯಾವುದೇ ಪರಿಹಾರಕ್ಕಾಗಿ ಹಾಗೂ ತಕರಾರುಗಳಿಗೆ ಜವಾಬ್ದಾರರಿರುವುದಿಲ್ಲ.

8) ಗುತ್ತಿಗೆದಾರರು ಕೆಲಸಕ್ಕೆ ಐ.ಎಸ್.ಐ. ಗುಣಮಟ್ಟದ ಸಿಮೆಂಟ್ ಸ್ಟೀಲ್ ಮತ್ತು ಪೈಪುಗಳನ್ನು ಸ್ವಂತ ಖರ್ಚಿನಲ್ಲಿ ಖರೀದಿಸಬೇಕು ಮತ್ತು ಗುಣಮಟ್ಟದ ಪರೀಕ್ಷೆಗಳಲ್ಲಿ ಒಪ್ಪಿತ ಸಾಮಗ್ರಿಗಳನ್ನು ಮಾತ್ರ ಬಳಸಬೇಕು.

9) ಕಾಮಗಾರಿಯ ಬಿಲ್ಲುಗಳನ್ನು ಆ ಸಾಲಿನ ಅನುದಾನ ಹಾಗೂ ಹಣ ಭರವಸೆ ಪತ್ರದ ಲಭ್ಯತೆಯನುಸಾರ ಹಣ ಬಡವಣೆ ಮಾಡಲಾಗುವುದು. ಈ ಬಗ್ಗೆ ಯಾವುದೇ ತಗಾದೆ ತಕರಾರುಗಳಿಗೆ ಆಸ್ಪದವಿಲ್ಲ. ಹಾಗೂ ಬಿಲ್ಲುಗಳ ಪಾವತಿಯಾಗದೆ ಇರುವ ಕಾರಣದಿಂದ ಕೆಲಸವನ್ನು ಸ್ಥಗಿತಗೊಳಿಸತಕ್ಕದ್ದಲ್ಲ.

10) ಗುತ್ತಿಗೆದಾರರು ಟೆಂಡರ್‌ನಲ್ಲಿ ಭಾಗವಹಿಸುವ ಮೊದಲು ಕಾಮಗಾರಿ ಸ್ಥಳವನ್ನು ಪರೀಕ್ಷಿಸಿ ಭಾಗವಹಿಸುವುದು ನಂತರ ಕಾಮಗಾರಿಯ ಸ್ಥಳ ಬಗ್ಗೆ ತಂಟೆ ತಕರಾರುಗಳಿಗೆ ಇಲಾಖೆಯು ಜವಾಬ್ದಾರರಾಗಿರುವುದಿಲ್ಲ.

ಪಿ.ಆರ್. 325 ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ.

**ಭದ್ರಾವತಿ ಅರಣ್ಯ ವಿಭಾಗ**

**ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ**

**ಸಂಕ್ಷಿಪ್ತ ಟೆಂಡರ್ ಕಂ ಹರಾಜು ಪ್ರಕಟಣೆ**

**ಸಂಖ್ಯೆ: ಬಿ1-ಎಂಎಫ್‌ಪಿ ಸಿಆರ್-11/2005-06, ದಿನಾಂಕ: 28ನೇ ಮೇ 2005**

**ವಿಷಯ:** 2005-2006ನೇ ಸಾಲಿಗೆ ಕಿರು ಅರಣ್ಯ ಉತ್ಪನ್ನಗಳ ಟೆಂಡರ್ ಕಂ ಹರಾಜು

ಈ ಮೂಲಕ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ ಭದ್ರಾವತಿ ಅರಣ್ಯ ವಿಭಾಗಕ್ಕೆ ಸೇರಿದ ಸರ್ಕಾರಿ ಅರಣ್ಯಗಳು, ಕಾಯ್ದಿಟ್ಟ ಅರಣ್ಯಗಳು, ಕಿರು ಅರಣ್ಯಗಳು ಹಾಗೂ ಅನುಭೋಗದಲ್ಲಿರುವ ಸರ್ಕಾರದ ಜಮೀನುಗಳಲ್ಲಿನ (ಪಂಚಾಯತ್ ಮತ್ತು ಅಮೃತ್‌ಮಹಲ್ ಕಾವಲ್‌ಗಳನ್ನು ಹೊರತುಪಡಿಸಿ) ಹುಣಸೇ ಫಸಲನ್ನು 2005-2006ನೇ ಸಾಲಿಗೆ (ದಿನಾಂಕ: 1.7.2005 ರಿಂದ 30.6.2006 ರವರೆಗೆ) ದಿನಾಂಕ: 24.6.2005 ರಂದು ಈ ಕಛೇರಿಯಲ್ಲಿ ಸಾಯಂಕಾಲ 4 ಗಂಟೆಗೆ ಕೆಳ ಸಹಿದಾರರು ಅಥವಾ ಅವರಿಂದ ಅಧಿಕೃತವಾಗಿ ನೇಮಕಗೊಂಡಿರುವ ಅಧಿಕಾರಿಗಳು ಟೆಂಡರ್ ಕಂ ಹರಾಜು ಮಾಡಲಿರುವರು.

| ಕ್ರ.ಸಂ. | ಯೂನಿಟ್ ಸಂಖ್ಯೆ | ಕಿರು ಅರಣ್ಯ ಉತ್ಪನ್ನದ ವಿಧ ಮತ್ತು ವಲಯ | | ಇ.ಎಂ.ಡಿ. ರೂ.ಗಳಲ್ಲಿ |
|---|---|---|---|---|
| 1 | 10 | ಹುಣಿಸೇ ಫಸಲು | ಭದ್ರಾವತಿ | 2000-00 |
| 2 | 11 | ಹುಣಿಸೇ ಫಸಲು | ಚನ್ನಗಿರಿ | 2000-00 |
| 3 | 12 | ಹುಣಿಸೇ ಫಸಲು | ತರೀಕೆರೆ | 2000-00 |
| 4 | 13 | ಹುಣಿಸೇ ಫಸಲು | ಅಜ್ಜಂಪುರ | 2000-00 |
| 5 | 14 | ಹುಣಿಸೇ ಫಸಲು | ಭದ್ರಾವತಿ | 2000-00 |
| 6 | 15 | ಹುಣಿಸೇ ಫಸಲು | ಉಂಬ್ಳೆಬೈಲು | 2000-00 |
| 7 | 16 | ಹುಣಿಸೇ ಫಸಲು | ಚನ್ನಗಿರಿ | 2000-00 |

ಹೆಚ್ಚಿನ ವಿವರಗಳನ್ನು ವಿಭಾಗ/ವಲಯ ಕಛೇರಿಗಳಿಂದ ಪಡೆಯಬಹುದು.

ಸೀಮಾ ಗರ್ಗ್

ಪಿ.ಆರ್. 329 ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ.

**P.N. MAYOHALL**

**IN THE COURT OF THE IV ADDL. CITY CIVIL JUDGE, MAYOHALL, BANGALORE**

**P & S.C.NO.15022/2004**

**Petitioner:** 1. D.N. Lakshman S/o late D.V.K. Narasimhachar, aged about 63 years, R/o at No.285, 7th Main, Padmanabhanagar, Bangalore-560070.

V/S

**Respondent:** NIL

**PUBLIC NOTICE**

Notice is hereby given that a petition have been made to this court under sections 276 of the Indian Succession Act, for grant of Probate in respect of the Will dated: 15.9.2002 of the deceased Smt. SAROJAMMA who died on 16.04.2003 at Bangalore.

Be it known that No Caveat has been entered and the said petition is posted for hearing on 21.06.2005, All person's claiming to have any interest may come and see the proceeding before grant of Probate in respect of the Will dated: 15.09.2002.

Given under my hand and the seal of the Court, this the 16.04.2005.

By Order of the Court,

PD-72 Asst. Registrar, City Civil Court, Mayohall unit, Bangalore.

**PUBLIC WORKS DEPARTMENT (National Highways)**

**Office of the Executive Engineer, National Highway Divn., Karwar**

**TENDER NOTIFICATION (TWO COVER BID SYSTEM)**

**No: EE/NHD/KWR/AE/NIT/2005-06/229, Dated: 24th May 2005**

Sealed item Rate Tenders for the works noted below under TWO COVER BID SYSTEM as per Karnataka Transparency in Public Procurement Act-2000 in prescribed form in duplicate are invited from

